## ಕರ್ನಾಟಕ ವಿಧಾನ ಪರಿಷತ್ತು

1) ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 174 (963)

2) ಸದಸ್ಯರ ಹೆಸರು : ಶ್ರೀ ಸುನೀಲ್ ಸುಬ್ರಮಣಿ ಎಂ.ಪಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

3) ಉತ್ತರಿಸುವ ದಿನಾಂಕ : 15.03.2021

4) ಉತ್ತರಿಸುವವರು : ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕೊಡಗು ಜಿಲ್ಲೆಯಲ್ಲಿ ಇತ್ತೀಚಿನ ದಿನಗಳಲ್ಲಿ ಆನೆಗಳು ಮತ್ತು ಹುಲಿಗಳು ಮನುಷ್ಯರ ಮೇಲೆ ದಾಳಿ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಇದರ ನಿಯಂತ್ರಣಕ್ಕೆ ಸರ್ಕಾರ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ಬಂದಿದೆ.<br><br>ವನ್ಯಜೀವಿಗಳು ಕಾಡಿನಿಂದ ಹೊರಗೆ ಬಾರದಂತೆ ಮುನ್ನೆಚ್ಚರಿಕೆಯ ಕ್ರಮವಾಗಿ ಇಲಾಖಾ ವತಿಯಿಂದ ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿದೆ.<br><br>1. ಅರಣ್ಯ ಪ್ರದೇಶದಲ್ಲಿ ಹುಲ್ಲುಗಾವಲು ಸಂರಕ್ಷಣೆ ಹಾಗೂ ಅಭಿವೃದ್ಧಿಗೊಳಿಸಲು 2019-20ನೇ ಸಾಲಿನಿಂದ ರೂ.5.00 ಕೋಟಿ ವೆಚ್ಚದಲ್ಲಿ ಲಂಟಾನ ಮತ್ತು ಯುಪಟೋರಿಯಂ ಕಳೆಗಳ ನಿರ್ಮೂಲನೆ ಎಂಬ ಹೊಸ ಯೋಜನೆಯನ್ನು ಅನುಷ್ಠಾನಗೊಳಿಸಲಾಗಿದೆ. ಈ ಯೋಜನೆಯಡಿ ಅರಣ್ಯ ಪ್ರದೇಶಗಳಲ್ಲಿ ದಟ್ಟವಾಗಿ ಬೆಳೆದ ಲಂಟಾನ ಮತ್ತು ಯುಪಟೋರಿಯಂ ಕಳೆಗಳನ್ನು ಹಂತಹಂತವಾಗಿ ಕಿತ್ತು ಸ್ವಚ್ಛಗೊಳಿಸಿ, ಅರಣ್ಯಕ್ಕೆ ಪೂರಕವಾದ ಹುಲ್ಲು ಬೆಳೆಯಲು ಅವಕಾಶ ಮಾಡಲಾಗಿದೆ.<br>2. ವನ್ಯಪ್ರಾಣಿಗಳಿಗಾಗಿ ಅರಣ್ಯ ಪ್ರದೇಶಗಳ ಒಳಗೆ ನೀರಿನ ಲಭ್ಯತೆ ಹೆಚ್ಚಿಸಲು ರಕ್ಷಿತಾರಣ್ಯಗಳಲ್ಲಿ ಕೆರೆಗಳ ನಿರ್ಮಾಣ ಹಾಗೂ ಪುನಶ್ಚೇತನಗೊಳಿಸಿ ವನ್ಯಪ್ರಾಣಿಗಳ ಆವಾಸಸ್ಥಾನವನ್ನು ಅಭಿವೃದ್ಧಿಗೊಳಿಸಲಾಗುತ್ತಿದೆ. ವನ್ಯಪ್ರಾಣಿಗಳಿಗೆ ಕುಡಿಯುವ ನೀರಿಗಾಗಿ 47 ಸಂಖ್ಯೆ ಕೆರೆ ನಿರ್ಮಾಣ ಮತ್ತು 66 ಹಾಲಿ ಇರುವ ಕೆರೆಗಳ ಹೂಳೆತ್ತುವ ಕಾಮಗಾರಿಗಳನ್ನು ನಿರ್ವಹಿಸಲಾಗಿದೆ.<br>3. ಕಾಡಾನೆಗಳು ಅರಣ್ಯ ಪ್ರದೇಶದಿಂದ ಹೊರಗೆ ಬಾರದಂತೆ ತಡೆಗಟ್ಟಲು ಅರಣ್ಯದಂಚಿನಲ್ಲಿ 34.35 ಕಿ.ಮೀ ಸೋಲಾರ್ ತಂತಿ ಬೇಲಿ ನಿರ್ಮಾಣ ಮಾಡಲಾಗಿದ್ದು, 161.60 ಕಿ.ಮೀ. ನಿರ್ವಹಣೆ ಮಾಡಲಾಗಿದೆ. 91.553 ಕಿ.ಮೀ. ಆನೆ ತಡೆ ಕಂದಕ ನಿರ್ಮಾಣ ಮಾಡಲಾಗಿದ್ದು, 140.69 ಕಿ.ಮೀ. ನಿರ್ವಹಣೆ ಮಾಡಲಾಗಿದೆ. 33.37 ಕಿ.ಮೀ. ತೂಗು ಸೋಲಾರ್ ತಂತಿ ಬೇಲಿ ನಿರ್ಮಾಣ ಮಾಡಲಾಗಿದೆ. 496.176 ಟನ್ ಉಪಯೋಗಿತ ರೈಲು ಹಳಿಗಳನ್ನು ಖರೀದಿಸಿದ್ದು, 24.625 ಉಪಯೋಗಿತ ರೈಲು ಹಳಿಗಳನ್ನು ಉಪಯೋಗಿಸಿ ಬ್ಯಾರಿಕೇಡ್ ನಿರ್ಮಾಣ ಮಾಡಲಾಗಿದೆ.<br>4. ಕೊಡಗು ಜಿಲ್ಲೆಯ ಅರಣ್ಯ ವೃತ್ತದ ವ್ಯಾಪ್ತಿಯ ವಲಯಗಳಲ್ಲಿ ಕಾಡಾನೆ ಹಾವಳಿಯನ್ನು ತುರ್ತು ನಿರ್ವಹಣೆ 52 ಸಂಖ್ಯೆ ಕ್ಷಿಪ್ರ ಸ್ಪಂದನ ತಂಡಗಳನ್ನು ರಚಿಸಿ ಕಾರ್ಯನಿರ್ವಹಿಸಲಾಗುತ್ತಿದೆ. |

.....2

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| | | 5. ಆಯ್ದ ವಲಯಗಳಲ್ಲಿ 71 ಸಂಖ್ಯೆ ಕಾಡಾನೆಗಳನ್ನು ಮರಳಿ ಕಾಡಿಗೆ ಓಡಿಸುವ ತಂಡ ರಚನೆ ಮಾಡಲಾಗಿರುತ್ತದೆ.<br>6. ಕಾಡಾನೆ ಇರುವಿಕೆ ಅವುಗಳ ಚಲನವಲನಗಳ ಬಗ್ಗೆ ಸಾರ್ವಜನಿಕರಿಗೆ ರೈತರಿಗೆ ಮಾಹಿತಿ ನೀಡುವ SMS Alert System ಕಾರ್ಯ ನಿರ್ವಹಿಸುತ್ತಿದೆ.<br>7. ಕಳ್ಳಬೇಟೆ ತಡೆ ಶಿಬಿರಗಳಿಗೆ ಹಾಗೂ **Rapid Response Teams (RRT)** ಗಳನ್ನು ಅಂದರೆ ಕಾಡಾನೆ ಹಿಮ್ಮೆಟ್ಟಿಸುವ ತಂಡಗಳನ್ನು ರಚಿಸಿ ಕಾಡಾನೆಗಳನ್ನು ಕಾಡಿಗೆ ಹಿಮ್ಮೆಟ್ಟಿಸುವ ಕಾರ್ಯ ಕೈಗೊಳ್ಳಲಾಗುತ್ತಿದೆ ಹಾಗೂ **Wireless Networking** ಮೂಲಕ ಮಾಹಿತಿ ಸಂವಹನ ಮಾಡಲಾಗುತ್ತಿದೆ.<br>8. ಕಾಡಾನೆಗಳ ಮಾಹಿತಿಯನ್ನು ಸಂಗ್ರಹಿಸಲು 24 ಗಂಟೆ ಕಾರ್ಯನಿರ್ವಹಿಸುವ ಮಾಹಿತಿ ಕೇಂದ್ರ ಸ್ಥಾಪಿಸಲಾಗಿದೆ. ವನ್ಯಪ್ರಾಣಿಗಳ ದಾಳಿಯಿಂದ ಭಾದಿತ ಗ್ರಾಮಗಳ ಜನರೊಂದಿಗೆ ಸಂಪರ್ಕ ಸಭೆಯನ್ನು ನಡೆಸಲಾಗುತ್ತಿದೆ.<br>9. ಕಾಡಾನೆ ಗುಂಪಿನಲ್ಲಿರುವ ವಯಸ್ಕ ಹೆಣ್ಣಾನೆಯನ್ನು ಗುರುತಿಸಿ, ರೇಡಿಯೋ ಕಾಲರ್ ಅಳವಡಿಸಿ ಆನೆಗಳ ಚಲನವಲನಗಳ ಬಗ್ಗೆ ಎಸ್.ಎಂ.ಎಸ್. ಹಾಗೂ ವಾಟ್ಸಾಪ್ ಮೂಲಕ ಜನರಿಗೆ ಮಾಹಿತಿಯನ್ನು ನೀಡಿ ಮಾನವ ಪ್ರಾಣಹಾನಿ ಹಾಗೂ ಮಾನವ ಗಾಯ ತಪ್ಪಿಸಲು ಕ್ರಮ ವಹಿಸಲಾಗುತ್ತಿದೆ. ವಿರಾಜಪೇಟೆ ವಿಭಾಗದಲ್ಲಿ 9 ಆನೆಗಳಿಗೆ ರೇಡಿಯೋ ಕಾಲರ್‌ಗಳನ್ನು ಅಳವಡಿಸಿ ಅವುಗಳ ಚಲನ ವಲನಗಳ ಬಗ್ಗೆ ನಿಗಾವಹಿಸಲಾಗುತ್ತಿದೆ.<br>10. ಸಾರ್ವಜನಿಕರಿಗೆ ಉಪಟಳ ನೀಡುತ್ತಿರುವ ಪುಂಡಾನೆಗಳನ್ನು ಗುರುತಿಸಿ, ಸೆರೆಹಿಡಿದು ಆಗಿಂದಾಗ್ಗೆ ಆನೆ ಶಿಬಿರಗಳಿಗೆ ಸ್ಥಳಾಂತರಿಸಲಾಗಿದೆ.<br>11. ಕೊಡಗು ಜಿಲ್ಲೆಯ ನಾಗರಹೊಳೆ ವ್ಯಾಪ್ತಿಯಲ್ಲಿ ರಕ್ಷಣಾ ಕೆಲಸಗಳಿಗಾಗಿ ಎಸ್.ಟಿ.ಪಿ.ಎಫ್ ತಂಡ ನೇಮಕ ಮಾಡಿ ರಕ್ಷಣಾ ಕಾರ್ಯಗಳನ್ನು ಕೈಗೊಳ್ಳಲಾಗುತ್ತಿದೆ.<br>12 ವನ್ಯಪ್ರಾಣಿಗಳ ರಕ್ಷಣಾ ದೃಷ್ಟಿಯಿಂದ ನಾಗರಹೊಳೆ ಹುಲಿ ಸಂರಕ್ಷಿತ ಪ್ರದೇಶದಲ್ಲಿ 37 ವನ್ಯಪ್ರಾಣಿ ಹತ್ಯೆ ತಡೆ ಶಿಬಿರಗಳನ್ನು ಸ್ಥಾಪನೆ ಮಾಡಿ ಪ್ರತಿದಿನ ಗಸ್ತು ಮಾಡಿ ಯಾವುದೇ ಅಕ್ರಮ ಚಟುವಟಿಕೆಗಳು ನಡೆಯದಂತೆ ಕ್ರಮ ಕೈಗೊಳ್ಳಲಾಗುತ್ತಿದೆ.<br>13. ಈ ರಕ್ಷಣಾ ಕಾರ್ಯದ ಸಿಬ್ಬಂದಿಗಳಿಗೆ ಹಾಗೂ ಇಲಾಖಾ ಸಿಬ್ಬಂದಿಗಳಿಗೆ ವೈರ್‌ಲೆಸ್ ವಾಕಿ ಟಾಕಿ, ಶಸ್ತ್ರಾಸ್ತ್ರ ಆಹಾರ ಸಾಮಗ್ರಿಗಳನ್ನು ಒದಗಿಸಿ ಪರಿಣಾಮಕಾರಿಯಾಗಿ ರಕ್ಷಣಾ ಕಾರ್ಯ ಕೈಗೊಳ್ಳಲಾಗುತ್ತಿದೆ.<br>14. ಮಾನವ-ಪ್ರಾಣಿ ಸಂಘರ್ಷವನ್ನು ತಡೆಯಲು ತಕ್ಷಣದ ಕ್ರಮಗಳನ್ನು ತೆಗೆದುಕೊಳ್ಳಲು **"ಕೊಡಗು ಮಾನವ-ವನ್ಯಪ್ರಾಣಿ ಸಂಘರ್ಷ ಉಪಶಮನ ಪ್ರತಿಷ್ಠಾನ"** ವನ್ನು ವೃತ್ತ ಮಟ್ಟದಲ್ಲಿ ಸ್ಥಾಪಿಸಲಾಗಿದೆ. |

.....3

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಸದರಿ ಜಿಲ್ಲೆಯಲ್ಲಿ ಹುಲಿ ಮತ್ತು ಆನೆಗಳ ದಾಳಿಯಿಂದ ಕಳೆದ ಎರಡು ವರ್ಷಗಳಲ್ಲಿ ಸಾವನ್ನಪ್ಪಿದ ಮತ್ತು ಗಾಯಗೊಂಡ ಜಾನುವಾರುಗಳ ಮತ್ತು ಮನುಷ್ಯರ ಸಂಖ್ಯೆ ಎಷ್ಟು; (ನೀಡಲಾದ ಪರಿಹಾರದ ವಿವರ ನೀಡುವುದು) | ಕೊಡಗು ಜಿಲ್ಲೆಯಲ್ಲಿ ಹುಲಿ ಮತ್ತು ಆನೆ ದಾಳಿಯಿಂದ ಕಳೆದ ಎರಡು ವರ್ಷಗಳಲ್ಲಿ ಮೃತಪಟ್ಟ ಮತ್ತು ಗಾಯಗೊಂಡ ಜಾನುವಾರುಗಳ ಮತ್ತು ಮನುಷ್ಯರ ವಿವರವನ್ನು ಅನುಬಂಧ-1ರಲ್ಲಿ ಒದಗಿಸಿದೆ. ಹುಲಿ ಮತ್ತು ಆನೆ ದಾಳಿಯಿಂದ ಮಾನವ ಪ್ರಾಣಹಾನಿ ಪ್ರಕರಣವಾರು ವಿವರಗಳನ್ನು ಅನುಬಂಧ-1(ಎ) ರಲ್ಲಿ ಹಾಗೂ ಮಾನವ ಗಾಯ ಪ್ರಕರಣವಾರು ವಿವರಗಳನ್ನು ಅನುಬಂಧ-1(ಬಿ) ರಲ್ಲಿ ಒದಗಿಸಿದೆ. |
| ಇ) | ಕೊಡಗು ಜಿಲ್ಲೆಯಲ್ಲಿ ಇತ್ತೀಚೆಗೆ ಕಂಡು ಬಂದ ಹುಲಿಗಳ ಸಂಖ್ಯೆ ಎಷ್ಟು; ಇವುಗಳನ್ನು ಹಿಡಿಯಲು ಸರ್ಕಾರ ಕೈಗೊಂಡ ಕ್ರಮಗಳೇನು? (ಸಂಪೂರ್ಣ ವಿವರ ನೀಡುವುದು) | ಕೊಡಗು ಜಿಲ್ಲೆಯ ಈ ಕೆಳಕಾಣಿಸಿದ ವಿಭಾಗಗಳಲ್ಲಿ ರಾಷ್ಟ್ರೀಯ ಹುಲಿ ಸಂರಕ್ಷಣಾ ಪ್ರಾಧಿಕಾರ, ನವದೆಹಲಿ ರವರ ಮಾರ್ಗಸೂಚಿಯಂತೆ 25 ದಿನಗಳ ಕಾಲ ಕ್ಯಾಮರಾ ಟ್ರ್ಯಾಪ್‌ನಲ್ಲಿ ಸೆರೆಯಾದ ಹುಲಿಗಳ ಸಂಖ್ಯೆ ಈ ಕೆಳಕಂಡಂತಿವೆ.<br><br>ಕ್ರ.ಸಂ / ವಿಭಾಗ / ಹುಲಿಗಳ ಸಂಖ್ಯೆ<br>1 / ನಾಗರಹೊಳೆ ಹುಲಿ ಯೋಜನೆ / 112<br>2 / ಮಡಿಕೇರಿ ವನ್ಯಜೀವಿ ವಿಭಾಗ / 06<br>3 / ಮಡಿಕೇರಿ ಪ್ರಾದೇಶಿಕ ವಿಭಾಗ / 09<br>4 / ವೀರಾಜಪೇಟೆ / 09<br><br>ಹುಲಿ ಹಾವಳಿ ಕಂಡುಬಂದಂತಹ ಪ್ರದೇಶಗಳಲ್ಲಿ ಹಾವಳಿ ತಡೆಗಟ್ಟಲು ಈ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗುತ್ತಿರುತ್ತದೆ.<br>➢ ಮುಂಜಾಗ್ರತಾ ಕ್ರಮವಾಗಿ ಹುಲಿ ಸಂಚರಿಸುತ್ತಿರುವ ಪ್ರದೇಶಗಳಲ್ಲಿ ಕ್ಯಾಮರಾ ಟ್ರಾಪ್‌ಗಳನ್ನು ಅಳವಡಿಸಿ ಹುಲಿ ಸಂಚರಿಸುತ್ತಿರುವ ಬಗ್ಗೆ ಖಚಿತಪಡಿಸಿಕೊಂಡು ಸೂಕ್ತ ಸ್ಥಳವನ್ನು ಗುರುತಿಸಿ ಬೋನುಗಳನ್ನು ಇರಿಸುವುದಲ್ಲದೆ ಹುಲಿಯನ್ನು ಸೆರೆಹಿಡಿಯಲು ಪ್ರತ್ಯೇಕವಾದ ತಂಡಗಳನ್ನು ರಚಿಸಿ ಕೂಂಬಿಂಗ್ ಕಾರ್ಯಾಚರಣೆಯನ್ನು ಸಾಕಾನೆಗಳ ಸಹಾಯದಿಂದ ಕೈಗೊಳ್ಳಲಾಗುತ್ತಿದೆ.<br>➢ ಹುಲಿ ಹಾವಳಿ ಪ್ರದೇಶಗಳಲ್ಲಿ ಜನಸಂಪರ್ಕ ಸಭೆ ನಡೆಸಲು ಹಾಗೂ ಮುಂಜಾಗ್ರತಾ ಕ್ರಮವಾಗಿ ಹಾವಳಿ ಇರುವ ಕಡೆ ಹಗಲು-ರಾತ್ರಿ ಗಸ್ತು ಮಾಡಲು ರಕ್ಷಣಾ ಪಡೆಯನ್ನು ರಚಿಸಲಾಗಿದೆ.<br>➢ ಹೆಚ್ಚು ಉಪಟಳ ನೀಡುತ್ತಿರುವ ಹಾಗೂ ಮಾನವ-ಪ್ರಾಣಹಾನಿ ಉಂಟಾಗುವ ಸಂದರ್ಭದಲ್ಲಿ ಮಾನವ ಪ್ರಾಣಹಾನಿಗೆ ಕಾರಣವಾಗಿರುವ ಹುಲಿಯನ್ನು ನಿರ್ದಿಷ್ಟವಾಗಿ ಕ್ಯಾಮರಾ ಟ್ರ್ಯಾಪ್ ಮೂಲಕ ನಿರ್ದಿಷ್ಟವಾಗಿ ಗುರುತಿಸಿ ಸೆರೆಹಿಡಿಯಲು ಅನುಮತಿ ನೀಡಲಾಗುತ್ತದೆ ಹಾಗೂ ಸೆರೆ ಹಿಡಿದ ಹುಲಿಯ ವೈದ್ಯಕೀಯ ತಪಾಸಣೆ ನಡೆಸಿ ಒಂದು ವೇಳೆ ಹುಲಿಯು ಗಾಯಗೊಂಡಿರುವುದು ಕಂಡುಬಂದಲ್ಲಿ, ಅದರ ಆರೋಗ್ಯದ ಹಿತದೃಷ್ಟಿಯಿಂದ ಕೂರ್ಗಳ್ಳಿ ಪುನರ್ವಸತಿ ಕೇಂದ್ರ, ಮೈಸೂರು ಇಲ್ಲಿಗೆ ಸ್ಥಳಾಂತರಿಸಿ ಚಿಕಿತ್ಸೆ ನೀಡಿ ಪೋಷಿಸಲಾಗುತ್ತಿದೆ. |

....4

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| | | ವೀರಾಜಪೇಟೆ ವಿಭಾಗ ವ್ಯಾಪ್ತಿಯಲ್ಲಿ ಸಾರ್ವಜನಿಕರಿಗೆ ಉಪಟಳ ನೀಡುತ್ತಿದ್ದ ಹುಲಿಯನ್ನು ನಿರ್ದಿಷ್ಟವಾಗಿ ಕ್ಯಾಮರಾ ಟ್ರ್ಯಾಪ್ ಮೂಲಕ ಗುರುತಿಸಿ, ಸೆರೆಹಿಡಿದು ಸೂಕ್ತ ಅರಣ್ಯ ಪ್ರದೇಶಕ್ಕೆ / ಪುನರ್ವಸತಿ ಕೇಂದ್ರಕ್ಕೆ ಸ್ಥಳಾಂತರಿಸಲು ಕ್ರಮ ಕೈಗೊಳ್ಳಲಾಗುತ್ತಿದ್ದು, ವಿವರ ಕೆಳಕಂಡಂತಿದೆ.<br>• ಪೊನ್ನಂಪೇಟೆ ವಲಯ ವ್ಯಾಪ್ತಿಯ ಕುಮಟೂರು ಗ್ರಾಮದಲ್ಲಿ ದಿನಾಂಕ: 20.05.2020 ರಂದು 1 ಹುಲಿಯನ್ನು ಸೆರೆ ಹಿಡಿಯಲಾಗಿರುತ್ತದೆ. (ಗಂಡು ಹುಲಿ)<br>• ತಿತಿಮತಿ ವಲಯ ವ್ಯಾಪ್ತಿಯ ಕುಮಟೂರು ಗ್ರಾಮದಲ್ಲಿ ದಿನಾಂಕ: 23.12.2020 ರಂದು ಒಂದು ಹುಲಿಯನ್ನು ಸೆರೆ ಹಿಡಿಯಲಾಗಿರುತ್ತದೆ. (ಹೆಣ್ಣು ಹುಲಿ)<br>• ಪೊನ್ನಂಪೇಟೆ ವಲಯ ವ್ಯಾಪ್ತಿಯ ಟಿ.ಶೆಟ್ಟಗೇರಿ ಕುಮಟೂರು ಗ್ರಾಮದಲ್ಲಿ ದಿನಾಂಕ: 20.02.2021 ರಂದು ಒಂದು ಹುಲಿಯನ್ನು ಸೆರೆ ಹಿಡಿಯಲಾಗಿರುತ್ತದೆ. (ಹೆಣ್ಣು ಹುಲಿ)<br>• ಪ್ರಸ್ತುತ ಕೊಡಗು ಜಿಲ್ಲೆಯಲ್ಲಿ ಅರಣ್ಯ ಇಲಾಖೆಯ 1 ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ, 1 ಅರಣ್ಯ ಸಂರಕ್ಷಣಾಧಿಕಾರಿ, 1 ಉಪ ಅರಣ್ಯ ಸಂರಕ್ಷಣಾಧಿಕಾರಿ ಮತ್ತು ಕ್ಷೇತ್ರ ನಿರ್ದೇಶಕರು, 3 ಉಪ ಅರಣ್ಯ ಸಂರಕ್ಷಣಾಧಿಕಾರಿ, 4 ಪಶುವೈದ್ಯಾಧಿಕಾರಿಗಳು, 5 ಶಾರ್ಪ್ ಶೂಟರ್‌ಗಳನ್ನು ಮತ್ತು ಸುಮಾರು 150 ಕ್ಷೇತ್ರ ಸಿಬ್ಬಂದಿಗಳನ್ನು, ಇಲಾಖೆಯ 6 ಆನೆಗಳನ್ನು ನಿಯೋಜಿಸಿ ಹುಲಿಯನ್ನು ಸೆರೆಹಿಡಿಯುವ ಕಾರ್ಯಚರಣೆ ಪ್ರಗತಿಯಲ್ಲಿರುತ್ತದೆ. |

ಸಂಖ್ಯೆ: ಅಪಜೀ 39 ಎಫ್‌ಡಬ್ಲ್ಯೂಎಲ್ 2021

(ಅರವಿಂದ ಲಿಂಬಾವಳಿ)
ಅರಣ್ಯ, ಕನ್ನಡ ಮತ್ತು ಸಂಸ್ಕೃತಿ ಸಚಿವರು

ಅನುಬಂಧ - 1

**ಆನೆ ಮತ್ತು ಹುಲಿ ದಾಳಿಯಿಂದ ಮಾನವ ಸಾವು ಮತ್ತು ಮಾನವ ಗಾಯಗೊಂಡ ಪ್ರಕರಣ ಹಾಗೂ ಸಾಕು ಪ್ರಾಣಿಗಳ ಹತ್ಯೆ ಪ್ರಕರಣಗಳು ಮತ್ತು ಗಾಯಗೊಂಡ ಪ್ರಕರಣಗಳ ವಿವರ (ದಿನಾಂಕ : 08.03.2021ರ ಅಂತ್ಯಕ್ಕೆ)**

| ಕ್ರ. ಸಂ | ವರ್ಷ | ವಿಭಾಗ | ಆನೆ ದಾಳಿ | | ಹುಲಿ ದಾಳಿ | | ಒಟ್ಟು | |
|---|---|---|---|---|---|---|---|---|
| | | | ಮಾನವ ಪ್ರಾಣ ಹಾನಿ | ಮಾನವ ಗಾಯ | ಮಾನವ ಪ್ರಾಣ ಹಾನಿ | ಮಾನವ ಗಾಯ | ಮಾನವ ಪ್ರಾಣ ಹಾನಿ | ಮಾನವ ಗಾಯ |
| 1 | 2019-20 | ಮಡಿಕೇರಿ | 1 | 4 | 0 | 0 | 1 | 4 |
| | | ವಿರಾಜಪೇಟೆ | 1 | 5 | 0 | 0 | 1 | 5 |
| | | ವನ್ಯಜೀವಿ ವಿಭಾಗ, ಮಡಿಕೇರಿ | 2 | 2 | 0 | 0 | 2 | 2 |
| | | ಒಟ್ಟು | | | | | 4 | 11 |
| | | | | | | | | |
| 2 | 2020-21 | ಮಡಿಕೇರಿ | 4 | 3 | 0 | 0 | 4 | 3 |
| | | ವಿರಾಜಪೇಟೆ | 0 | 2 | 3 | 1 | 3 | 3 |
| | | ವನ್ಯಜೀವಿ ವಿಭಾಗ, ಮಡಿಕೇರಿ | 2 | 0 | 0 | 0 | 2 | 0 |
| | | ಒಟ್ಟು | | | | | 9 | 6 |

| ಕ್ರ.ಸಂ | ವಿಭಾಗ | ಹುಲಿದಾಳಿಯಿಂದ ಉಂಟಾದ ಜಾನುವಾರುಗಳ ಮೇಲೆ ದಾಳಿ | |
|---|---|---|---|
| | | ಪ್ರಕರಣ | ಪಾವತಿಸಲಾದ ಮೊತ್ತ (ರೂ.ಗಳಲ್ಲಿ) |
| 2019-20 | | | |
| 1 | ಮಡಿಕೇರಿ | 07 | 640000.00 |
| 2 | ವಿರಾಜಪೇಟೆ | 17 | 170000.00 |
| 3 | ವನ್ಯಜೀವಿ ವಿಭಾಗ, ಮಡಿಕೇರಿ | 27 | 270000.00 |
| | ಒಟ್ಟು | 51 | 1080000.00 |
| 2020-21 | | | |
| 1 | ಮಡಿಕೇರಿ | 09 | 90000.00 |
| 2 | ವಿರಾಜಪೇಟೆ | 28 | 280000.00 |
| 3 | ವನ್ಯಜೀವಿ ವಿಭಾಗ, ಮಡಿಕೇರಿ | 18 | 170000.00 |
| | ಒಟ್ಟು | 55 | 540000.00 |

ಅನುಬಂಧ-1(ಉ)

ಕೊಡಗು ವೃತ್ತದ ವ್ಯಾಪ್ತಿಯಲ್ಲಿ ವನ್ಯಪ್ರಾಣಿ (ಕಾಡಾನೆ ಮತ್ತು ಹುಲಿ) ದಾಳಿಯಿಂದ ಗಾಯಗೊಂಡ ವ್ಯಕ್ತಿಗಳ ವಿವರ (2020-21ರ ವರೆಗೆ ದಿನಾಂಕ :06.03.2021ರ ಅಂತ್ಯಕ್ಕೆ)

## ಹುಲಿ ದಾಳಿಯಿಂದ ಗಾಯಗೊಂಡವರ ವಿವರ

| ಕ್ರ.ಸಂ | ವಿಭಾಗ | ವಲಯ | ಗಾಯಗೊಂಡ ವ್ಯಕ್ತಿಯ ಹೆಸರು ಮತ್ತು ಗ್ರಾಮ | ಪಾವತಿಸಲಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|---|
| 2019-2020 | | | | |
| ಯಾವುದೇ ಪ್ರಕರಣ ಇರುವುದಿಲ್ಲ | | | | |
| 2020-2021 | | | | |
| ಯಾವುದೇ ಪ್ರಕರಣ ಇರುವುದಿಲ್ಲ | | | | |

## ಆನೆ ದಾಳಿಯಿಂದ ಗಾಯಗೊಂಡವರ ವಿವರ

| ವಿಭಾಗ | ಹೆಸರು | ವಿಳಾಸ | ಪಾವತಿಸಿದ ಪರಿಹಾರದ ಮೊತ್ತ |
|---|---|---|---|
| 2019-2020 | | | |
| ಮಡಿಕೇರಿ | ಶ್ರೀ ಹೆಚ್.ಜೆ. ನವೀನ್‌ಕುಮಾರ್ | ಕುಶಾಲನಗರ | 244098.00 |
| | ಶ್ರೀಮತಿ ಕಲಾವತಿ | ವಾಲ್ನೂರು, ಕುಶಾಲನಗರ | 287175.00 |
| | ಶ್ರೀ ರಾಮು ವೈ ಎಂ | ಕುಶಾಲನಗರ (ಮಾಲ್ದಾರೆ) | 300000.00 |
| | ಶ್ರೀ ಬಿರುಮಣ ಲೀಲಾಧರ | ಜೋಡುಪಾಲ, ಮದೆ | 338065.00 |
| ವಿರಾಜಪೇಟೆ | ಕು ಚಂದನ್ ಬಿ.ಎಲ್ | ಬಿಟ್ಟಂಗಾಲ | 65734.00 |
| | ಶ್ರೀಮತಿ ಕಮಲ | ಸಿದ್ಧಾಪುರ | 30000.00 |
| | ಶ್ರೀಮತಿ ಅಮ್ಮಾಳು | ಕಣ್ಣಂಗಾಲ | 34256.00 |
| | ಶ್ರೀಮತಿ ಕಮಲ | ಕಣ್ಣಂಗಾಲ | 23026.00 |
| | ಶ್ರೀ ಸುಂದರ್‌ರಾಜ್ | ಎಮ್ಮೆಗುಂಡಿ ಟಾಟಾ ಸಂಸ್ಥೆ | 8538.00 |
| ವನ್ಯಜೀವಿ ವಿಭಾಗ | ಶ್ರೀ ಹೆಚ್.ಡಿ.ಕಮಲಾಕ್ಷ | ಕರಿಕೆ ಗ್ರಾಮ | 11769.00 |
| | ಶ್ರೀ ಅಬ್ದುಲ್ ಅಜೀಜ್ | ಕುಟ್ಟ, ಶ್ರೀಮಂಗಲ ವಲಯ | 51612.00 |
| 2020-2021 | | | |
| ಮಡಿಕೇರಿ | ಶ್ರೀ ಮುತ್ತಪ್ಪ | ಹುದುಗೂರು | 190000.00 |
| | ಶ್ರೀ ಎ.ಆರ್.ಚೆಟ್ಟಿಯಪ್ಪ | ಅರಣ್ಯ ವೀಕ್ಷಕ, ಸೋಮವಾರಪೇಟೆ | 237323.00 |
| | ಶ್ರೀ ಕಾರ್ಯಪ್ಪ | ದೊಡ್ಡಳ್ಳಿ | 119917.00 |
| ವಿರಾಜಪೇಟೆ | ಶ್ರೀಮತಿ ತಿತೀರ ಸರೋಜ | ಅತ್ತೂರು ಗ್ರಾಮ | |
| | ಶ್ರೀ ಸಿ.ಪಿ.ಮುತ್ತಣ್ಣ | ಅತ್ತೂರು ಪಾಲಿಬೆಟ್ಟ | |
| ಮಡಿಕೇರಿ ವನ್ಯಜೀವಿ ವಿಭಾಗ | ಯಾವುದೇ ಪ್ರಕರಣ ಇರುವುದಿಲ್ಲ | | |

ಕೊಡಗು ವೃತ್ತದ ವ್ಯಾಪ್ತಿಯಲ್ಲಿ ವನ್ಯಪ್ರಾಣಿ (ಕಾಡಾನೆ ಮತ್ತು ಹುಲಿ) ದಾಳಿಯಿಂದ ಮೃತಪಟ್ಟ ವ್ಯಕ್ತಿಗಳ ವಿವರ

(2020-21ರ ವರೆಗೆ ದಿನಾಂಕ :08.03.2021ರ ಅಂತ್ಯಕ್ಕೆ)

## ಹುಲಿ ದಾಳಿಯಿಂದ ಮೃತ ಪಟ್ಟವರ ವಿವರ

| ಕ್ರ.ಸಂ | ವಿಭಾಗ | ವಲಯ | ಮೃತಪಟ್ಟ ವ್ಯಕ್ತಿಯ ಹೆಸರು ಮತ್ತು ಗ್ರಾಮ | ಪಾವತಿಸಲಾದ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|---|---|
| 2019-2020 | | | | |
| ಯಾವುದೇ ಪ್ರಕರಣ ಇರುವುದಿಲ್ಲ | | | | |
| 2020-2021 | | | | |
| 1 | ಮಡಿಕೇರಿ ವನ್ಯಜೀವಿ ವಿಭಾಗ | ಶ್ರೀಮಂಗಲ ವಲಯ ಪೊನ್ನಂಪೇಟೆ | ಶ್ರೀ ಎರವರ ಅಯ್ಯಪ್ಪ, ಕುಮಟೂರು ಗ್ರಾಮ | 2.00 |
| 2 | ಮಡಿಕೇರಿ ವನ್ಯಜೀವಿ ವಿಭಾಗ | ಶ್ರೀಮಂಗಲ ವಲಯ ಪೊನ್ನಂಪೇಟೆ | ಶ್ರೀಮತಿ ಬೊಳ್ಳಕ್ಕ (ಚಿಣ್ಣಿ) | 2.00 |
| 3 | ಮಡಿಕೇರಿ ವನ್ಯಜೀವಿ ವಿಭಾಗ | ಶ್ರೀಮಂಗಲ ವಲಯ ಪೊನ್ನಂಪೇಟೆ | ಶ್ರೀ ರಂಗಸ್ವಾಮಿ ( 08.03.2021) | 7.50 |

## ಆನೆ ದಾಳಿಯಿಂದ ಮೃತ ಪಟ್ಟವರ ವಿವರ

| ವಿಭಾಗ | ಹೆಸರು ಮತ್ತು ಮೃತಪಟ್ಟ ದಿನಾಂಕ | ವಿಳಾಸ |
|---|---|---|
| 2019-2020 | | |
| ಮಡಿಕೇರಿ | ಶ್ರೀ ಪೆಮ್ಮಯ್ಯ ಮೃತ ಪಟ್ಟ ದಿನಾಂಕ :07.02.20 | ಅವರೆಗುಂದ ಗ್ರಾಮ |
| ವಿರಾಜಪೇಟೆ | ಶ್ರೀ ಮುರುದಯ್ಯ, ಮೃತ ಪಟ್ಟ ದಿನಾಂಕ :08.08.2019 | ಚೆನ್ನಯ್ಯನಕೊಟ್ಟೆ ಗ್ರಾಮ ತಿತಿಮತಿ ವಲಯ |
| | ಶ್ರೀ ಫಣಿ ಎರವರ ರಾಜು ಮೃತ ಪಟ್ಟ ದಿನಾಂಕ : 28.03.2020 | ಕುಮಟೂರು ಗ್ರಾಮ |
| ವನ್ಯಜೀವಿ ವಿಭಾಗ | ಶ್ರೀ ಚೋಕಿರ ಸುಧಾ ಮೃತ ಪಟ್ಟ ದಿನಾಂಕ :03.05.2019 | ಕುಟ್ಟಪ್ಪ. ಕಾಯಿಮನೆ ಗ್ರಾಮ ವಿರಾಜಪೇಟೆ ತಾಲ್ಲೂಕು |
| | ಶ್ರೀ ಕರಿಯ ಮೃತ ಪಟ್ಟ ದಿನಾಂಕ : 21.11.2019 | ಕುಟ್ಟ ಗ್ರಾಮ ವಿರಾಜಪೇಟೆ ತಾಲ್ಲೂಕು |
| 2020-2021 | | |
| ಮಡಿಕೇರಿ | ಶ್ರೀ ಎಂ.ಸಿ.ಲೋಕೇಶ್ ಮೃತ ಪಟ್ಟ ದಿನಾಂಕ :11.04.2020 | ರಂಗಸಮುದ್ರ ಗ್ರಾಮ ಸೋಮವಾರಪೇಟೆ ತಾಲ್ಲೂಕು |
| | ಶ್ರೀ ಕುಡಿಯರ ಚಿಣ್ಣಪ್ಪ ಮೃತ ಪಟ್ಟ ದಿನಾಂಕ :15.06.2020 | ಯವಕಪಾಡಿ ಗ್ರಾಮ ಮಡಿಕೇರಿ |
| | ಶ್ರೀಮತಿ ನೀನಾ ಮುತ್ತಣ್ಣ ಮೃತ ಪಟ್ಟ ದಿನಾಂಕ :15.08.2020 | ಮೊದೂರು ಗ್ರಾಮ ಸೋಮವಾರಪೇಟೆ |
| ವಿರಾಜಪೇಟೆ | ಶ್ರೀ ಪಣಿ ಎರವರ ಮಾದ ಮೃತ ಪಟ್ಟ ದಿನಾಂಕ:04.07.2020 | ಕೊಳತ್ತೋಡು ಬೈಗೋಡು, ವಿರಾಜಪೇಟೆ |
| | ಶ್ರೀ ಸುದೀಪ್ ಮೃತ ಪಟ್ಟ ದಿನಾಂಕ :26.02.2021 | ಸಿದ್ದಾಪುರ |